# ಕರ್ನಾಟಕ ವಿಧಾನ ಪರಿಷತ್

| | |
|---|---|
| ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1870 |
| ಉತ್ತರಿಸಬೇಕಾದ ದಿನಾಂಕ | 15.03.2022 |
| ಉತ್ತರಿಸಬೇಕಾದ ಸಚಿವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ನಗರಾಭಿವೃದ್ಧಿ ಪ್ರಾಧಿಕಾರ ಯಾವಾಗ ಪ್ರಾರಂಭವಾಯಿತು; ಇಲ್ಲಿಯವರೆಗೂ ಈ ಪ್ರಾಧಿಕಾರದಿಂದ ನಡೆಯುತ್ತಿರುವ ಚಟುವಟಿಕೆಗಳೇನು; | ಬೀದರ ನಗರಾಭಿವೃದ್ಧಿ ಪ್ರಾಧಿಕಾರವು ಸರ್ಕಾರದ ಆದೇಶ ಸಂಖ್ಯೆ: ವನಅ/181/ಟಿಟಿಪಿ/88, ದಿನಾಂಕ:02-05-1988 ರ ಪ್ರಕಾರ ಅಸ್ತಿತ್ವಕೆ ಬಂದಿದೆ. ಪ್ರಾಧಿಕಾರವು ಕರ್ನಾಟಕ ನಗರಾಭಿವೃದ್ಧಿ ಕಾಯ್ದೆ ಹಾಗೂ ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಗಿನಂತೆ ಕಾರ್ಯನಿರ್ವಹಿಸುತ್ತಿದೆ.<br>1. ಆನ್‌ಲೈನ್ ಮುಖಾಂತರ ಕೃಷಿ ಜಮೀನುಗಳಿಗೆ ಕೃಷಿಯೇತರ ಜಮೀನುಗಳಾಗಿ ಭೂ ಪರಿವರ್ತನೆಗೆ ತಾಂತ್ರಿಕ ಅಭಿಪ್ರಾಯ ನೀಡುವುದು.<br>2. ಖಾಸಗಿ ಬಡಾವಣೆಗಳ ವಿನ್ಯಾಸವನ್ನು ಅನುಮೋದಿಸುವುದು.<br>3. ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆಯಂತೆ ನಾಗರೀಕ ಸೌಲಭ್ಯ ನಿವೇಶನಗಳನ್ನು ಹಂಚಿಕೆ ಮಾಡುವುದು.<br>4. ಪ್ರಾಧಿಕಾರದಿಂದ ವಸತಿ ಯೋಜನೆ ರೂಪಿಸಿ ನಿವೇಶನಗಳನ್ನು ಹಂಚಿಕೆ ಮಾಡುವುದು.<br>5. ನಗರದ ಯೋಜನಾಬದ್ಧ ಬೆಳವಣಿಗೆಗೆ ಮಹಾಯೋಜನೆಯನ್ನು ತಯಾರಿಸುವುದು.<br>6. ನಗರದ ಯೋಜನಾ ಹಿತದೃಷ್ಟಿಯಿಂದ ಅವಶ್ಯವಿರುವ ಯೋಜನೆಯನ್ನು ರೂಪಿಸುವುದು.<br>7. ನಗರಸಭೆಯಿಂದ ಆನ್‌ಲೈನ್ ಮುಖಾಂತರ ಬರುವ ನಿವೇಶನಗಳಿಗೆ ಕಟ್ಟಡ ಪರವಾನಿಗೆ ತಾಂತ್ರಿಕ ಅಭಿಪ್ರಾಯ ನೀಡುವುದು. |
| ಆ) | ಪ್ರಾಧಿಕಾರದ ವತಿಯಿಂದ ಕಳೆದ 5 ವರ್ಷಗಳಿಂದ ನೀಡುತ್ತಿರುವ ಕಾರ್ಯಕ್ರಮಗಳೇನು; (ಸ್ಪಷ್ಟ ಮಾಹಿತಿ ಒದಗಿಸುವುದು) | ಪ್ರಾಧಿಕಾರದ ವತಿಯಿಂದ ಕಳೆದ 5 ವರ್ಷಗಳಲ್ಲಿ ಈ ಕೆಳಗಿನಂತೆ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>1. ಹೈದ್ರಾಬಾದ್‌ದಿಂದ ಬೀದರ್ ನಗರಕ್ಕೆ ಬರುವ ರಸ್ತೆಗೆ ಸ್ವಾಗತ ಕಮಾನು ಅಳವಡಿಸಲಾಗಿರುತ್ತದೆ.<br>2. ರೈತರ ಸಹಭಾಗಿತ್ವ ಶೇ.50:50 ರ ಅನುಪಾತದ ಅಡಿಯಲ್ಲಿ ಬೀದರ ತಾಲ್ಲೂಕಿನ ಗೋರನಳ್ಳಿ (ಬಿ) ಗ್ರಾಮದ ಸರ್ವೆ ನಂ:22/2 ರಲ್ಲಿ ವಿಸ್ತೀರ್ಣ 14 ಎಕರೆ 35 ಗುಂಟೆ ಮತ್ತು ಸರ್ವೆ ನಂ:21/1 ರಲ್ಲಿ ವಿಸ್ತೀರ್ಣ 17 ಎಕರೆ 20 ಗುಂಟೆ ವಸತಿ (ಸನ್ಮಾನ್ಯ ಶ್ರೀ. ಬಿ.ಎಸ್. ಯಡಿಯೂರಪ್ಪಾ ಬಡಾವಣೆಯಲ್ಲಿನ) ಯೋಜನೆಯಲ್ಲಿನ ನಿವೇಶನ ಹಂಚಿಕೆ ಕಾರ್ಯಪ್ರಗತಿಯಲ್ಲಿರುತ್ತದೆ. |

| | | |
|---|---|---|
| ಇ) | ಈ ಪ್ರಾಧಿಕಾರದಿಂದ ವಸೂಲಾದ ಕರವೇಷ್ಟು; ಯಾವ ಯಾವ ಕಾರ್ಯಕ್ರಮಗಳಿಗೆ ಬಳಸಲಾಗುತ್ತಿದೆ; ಬಳಸಿದ್ದಲ್ಲಿ (ವರ್ಷವಾರು ಕಾರ್ಯಕ್ರಮಗಳವಾರು ಮಾಹಿತಿ ನೀಡುವುದು) | ಪ್ರಾಧಿಕಾರಕ್ಕೆ ಪರಿಶೀಲನಾ ಶುಲ್ಕ, ನಕ್ಷೆ ತಯಾರಿಕಾ ಶುಲ್ಕ, ಉತ್ತಮತೆ ಶುಲ್ಕ, ಕೆರೆ ಪುನರುಜ್ಜೀವನ ಶುಲ್ಕ, ಕಾಂಪ್ರೋಜಿಟ್ ಶುಲ್ಕ, ರಿಂಗ್ ರೋಡ್ ಸೇಸ್, ವಾಟರ್ ಸೇಸ್, ಸ್ಲಮ್ ಸೇಸ್, ಆಡಿಟ್ ಶುಲ್ಕ, ಭೂ ಪರಿವರ್ತನೆ ಪರಿಶೀಲನಾ ಶುಲ್ಕ, ನಕ್ಷೆಗಳ ಪೂರೈಕೆ ಶುಲ್ಕ, ನಾಗರೀಕ ಸೌಲಭ್ಯ ನಿವೇಶನ ಹಂಚಿಕೆ ಶುಲ್ಕ, ವಸತಿ ಯೋಜನೆಯ ವಿಳಂಬ ಅವಧಿಯ ನಿವೇಶನಗಳ ದಂಡ ಶುಲ್ಕಗಳನ್ನು ಹಾಗೂ ಇತರೆ ಶುಲ್ಕಗಳನ್ನು ಪ್ರಾಧಿಕಾರದಲ್ಲಿ ಪಡೆಯಲಾಗುತ್ತಿದೆ. ಹಾಗಾಗಿ ಈ ಎಲ್ಲಾ ಮೂಲಗಳಿಂದ ಬಂದಿರುವ ಒಟ್ಟು ಮೊತ್ತ ರೂ.9,08,61,765/- ಗಳಾಗಿರುತ್ತವೆ. ಪ್ರಾಧಿಕಾರಕ್ಕೆ ವಿವಿಧ ಮೂಲಗಳಿಂದ ಜಮೆ ಆಗಿರುವ ಶುಲ್ಕಗಳಲ್ಲಿ ಈ ಕೆಳಗಿನಂತೆ ಕಾರ್ಯಕ್ರಮಗಳಿಗೆ ಬಳಸಲಾಗಿದೆ.<br>1. 2016-17 ನೇ ಸಾಲಿನಲ್ಲಿ:- ಪ್ರಾಧಿಕಾರದ ವಸತಿ ಅಭಿವೃದ್ಧಿ ಯೋಜನೆಯಾದ ಬೀದರ ನಗರದ ಚಿದ್ರಿ ಗ್ರಾಮದ ಸರ್ವೆ ನಂ:125 (ಸಿದ್ರಾಯಮಯ್ಯಾ ಬಡಾವಣೆ) ಯಲ್ಲಿ ಕಾಯ್ದಿರಿಸಿದ ಉದ್ಯಾನವನ ಅಭಿವೃದ್ಧಿಗಾಗಿ ರೂ.25.00 (ಲಕ್ಷ) ಗಳು.<br>2. 2018-19 ನೇ ಸಾಲಿನಲ್ಲಿ:- ಬಸ್ ಶೇಲ್ಟರ್ ನಿರ್ಮಾಣ ಕಾಮಗಾರಿಯನ್ನು ರೂ.4.99 ಲಕ್ಷಗಳ ಪೈಕಿ ಶೇ:50 ರಷ್ಟು ಮೊತ್ತ ರೂ.2,49,500/- ಗಳು.<br>3. 2018-19 ನೇ ಸಾಲಿನಲ್ಲಿ:- ಸ್ವಾಗತ ಕಮಾನು ನಿರ್ಮಾಣಕ್ಕಾಗಿ ಕಾಮಗಾರಿಯನ್ನು ರೂ.4.99 ಲಕ್ಷಗಳು.<br>4. 2020-21 ನೇ ಸಾಲಿನಲ್ಲಿ:- ರೈತರ ಸಹಭಾಗಿತ್ವದ ಶೇ:50:50 ಯೋಜನೆಗೆ ಸರ್ಕಾರದಿಂದ ಅನುಮೋದನೆ ನೀಡಿರುವಂತೆ ಗೋರನಳ್ಳಿ (ಬಿ) ಗ್ರಾಮದ ಸರ್ವೆ ನಂ:22/2 ಮತ್ತು 21/1 ಯೋಜನೆಯಲ್ಲಿ ವಿವಿಧ ಕಾಮಗಾರಿಗಳಾದ ರಸ್ತೆ ಮತ್ತು ಚರಂಡಿ ಕಾಮಗಾರಿಗೆ ರೂ.296.10 ಲಕ್ಷಗಳನ್ನು ನೀರು ಸರಬರಾಜು ಮತ್ತು ಒಳಚರಂಡಿ ಕಾಮಗಾರಿಗೆ ರೂ.300.00 ಲಕ್ಷ ಮತ್ತು ವಿದ್ಯುತ್ ಕಾಮಗಾರಿಗಳಿಗೆ ರೂ.47,88883/- ಗಳು. |
| ಈ) | ಈ ಪ್ರಾಧಿಕಾರದಲ್ಲಿ ವಿವಿಧ ಲೆಕ್ಕ ಶೀರ್ಷಿಕೆಯಡಿ ಉಳಿದಿರುವ ಮೊತ್ತವೆಷ್ಟು; (ಸಂಪೂರ್ಣ ಮಾಹಿತಿ ಒದಗಿಸುವುದು) | ಪ್ರಾಧಿಕಾರದಲ್ಲಿ ಎಲ್ಲಾ ಮೂಲಗಳಿಂದ ಜಮೆಯಾಗಿ ಲೆಕ್ಕ ಶೀರ್ಷಿಕೆಯಡಿ ಉಳಿದಿರುವ ಒಟ್ಟು ಮೊತ್ತ ರೂ.9,08,61,765/- ಗಳಿರುತ್ತವೆ. |
| ಉ) | ಪ್ರಾಧಿಕಾರದಲ್ಲಿ ಪ್ರಸ್ತುತ ಸಿಬ್ಬಂದಿಗಳ ಕೊರತೆ ಇದ್ದು, ಈ ಕೊರತೆಯನ್ನು ನೀಗಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಪ್ರಾಧಿಕಾರದಲ್ಲಿ ತಾಂತ್ರಿಕ ಮತ್ತು ಆಡಳಿತಾತ್ಮಕ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಹುದ್ದೆಗಳ ಸೃಜಿಸುವ ಕುರಿತು ಆಯುಕ್ತರು, ಬೀದರ್ ನಗರಾಭಿವೃದ್ಧಿ ಪ್ರಾಧಿಕಾರ ರವರಿಂದ ದಿನಾಂಕ 28.02.2022 ರಂದು ಪ್ರಸ್ತಾವನೆ ಸ್ವೀಕೃತವಾಗಿದ್ದು, ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ನಅಇ 51 ಗುಅಪ್ರಾ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

**(ಬಿ.ಎ. ಬಸವರಾಜ)**
**ನಗರಾಭಿವೃದ್ಧಿ ಸಚಿವರು**